# ಚಿಲ್ಲಾಳ ಚರಿತ್ರ.



## ೧. ಶ್ರೀಯಾಳರಾಜನು, ಅವನ ಹೆಂಡತಿಯಾದ ಚಾಂಗುಣಿಯು ಮತ್ತು ಅವನ ಮಗನಾದ ಚಿಲ್ಲಾಳನು.



ಬಹು ಪ್ರಾಚೀನ ಕಾಲದಲ್ಲಿ ಕಾಂತಿಪುರ ಎಂಬ ಹೆಸರಿನ ಒಂದು ನಗರವಿತ್ತು. ಆ ನಗರದಲ್ಲಿ ಶ್ರೀಯಾಳನೆಂಬ ಒಬ್ಬ ಪುಣ್ಯಶ್ಲೋಕಿ ರಾಜನು ಇರುತ್ತಿದ್ದನು. ಅವನ ರಾಜ್ಯದಲ್ಲಿಯ ಪ್ರಜೆಗಳಿಗೆ ದುಃಖವು ಅಥವಾ ಪೀಡೆಯು ಯಾವದೂ ಗೊತ್ತಿದ್ದಿಲ್ಲ. ಶ್ರೀಯಾಳರಾಜನು ತನ್ನ ಪ್ರಜೆಗಳನ್ನು ಅತ್ಯಂತ ಸಂತುಷ್ಟರಾಗಿಡಲಿಕ್ಕೆ ಹಗಲಿರುಳು ಮನಃಪೂರ್ವಕವಾಗಿ ಪ್ರಯತ್ನ ಮಾಡುತ್ತಿದ್ದನು. ದೀನರಿಗೂ ಅನಾಥರಿಗೂ ಅವಯವಹೀನರಿಗೂ ಬಹಳ ದಯಾದಾಕ್ಷಿಣ್ಯವನ್ನು ತೋರಿಸುತ್ತಿದ್ದನು. ಅತಿಥಿ ಅಭ್ಯಾಗತರಿಗಂತೂ ಆದರ ಸತ್ಕಾರ ಮಾಡುವಲ್ಲಿ ಅವನು ಕರ್ಣನ ಅವತಾರವೇ ಆಗಿದ್ದನು. ಅಶಕ್ತರಿಗೆ ಸಶಕ್ತರು ಬಲಾತ್ಕಾರವನ್ನು ಅಥವಾ ಹಿಂಸೆಯನ್ನು ಮಾಡಬಾರದೆಂದು ಅವನು ಬಹಳ ದಕ್ಷತೆಯನ್ನು ಇಟ್ಟಿದ್ದನು. ಅವನು ಯಾವತ್ತು ಪ್ರಜೆಗಳಿಗೆ ಸರಿಯಾದ ನ್ಯಾಯವು ದೊರಕಬೇಕೆಂದು ಯಾವಾಗಲು ಲವಲವಿಕೆಯುಳ್ಳವನಾಗಿದ್ದನು. ಅವನು ತನ್ನ ಪ್ರಜೆಗಳಿಗೆ ತನ್ನ ದರ್ಶನಕ್ಕೆ ಬೇಕಾದಾಗ ಬರಲಿಕ್ಕೂ ತಮ್ಮ ತಮ್ಮ ದುಃಖಗಳನ್ನು ಹೇಳಿಕೊಳ್ಳಲಿಕ್ಕೂ ತುಂಬಾ ಅನುಕೂಲತೆಯನ್ನು ಮಾಡಿಕೊಟ್ಟಿದ್ದನು. ಸಾರಾಂಶ—ತಂದೆ ತಾಯಿಗಳು ತಮ್ಮ

ಹೊಟ್ಟೆಯಿಂದ ಹುಟ್ಟಿದ ಒಬ್ಬನೇ ಒಬ್ಬ ಮಗನಿಗೆ ಪ್ರೀತಿಯನ್ನೂ ಆರೈಕೆಯನ್ನೂ ಮಾಡುವಂತೆ ಶ್ರೀಯಾಳರಾಜನು ತನ್ನ ಯಾವತ್ತು ಪ್ರಜೆಗಳಿಗೆ ಪ್ರೀತಿಯನ್ನೂ ಆರೈಕೆಯನ್ನೂ ಮಾಡುತ್ತಿದ್ದನು. ಅವನು ತನ್ನ ರಾಜ್ಯಕಾರಭಾರವನ್ನು ನೋಡಿಕೊಂಡು ತನಗೆ ಉಳಿದ ಯಾವತ್ತು ವೇಳೆಯನ್ನು ಪರಮೇಶ್ವರನ ಭಜನೆಯಲ್ಲಿ ಕಳೆಯುತ್ತಿದ್ದನು. ಅವನು ಮಹಾ ಶಿವಭಕ್ತನಿದ್ದನು. ಅವನು ನಿತ್ಯ ಪ್ರಾತಃಕಾಲದಲ್ಲಿ ಒಂದು ಪ್ರಹರ ರಾತ್ರಿಯು ಇರುವಾಗ್ಗೆ ಎದ್ದು ಪ್ರಾತರ್ವಿಧಿಯನ್ನು ಮುಗಿಸಿಕೊಂಡು, ಸ್ನಾನವನ್ನು ಮಾಡಿ ಷೋಡಶೋಪಚಾರದಿಂದ ಶಿವಪೂಜೆಯನ್ನು ಮಾಡಿ, ಪೂಜೆಯು ಮುಗಿದ ನಂತರ ವ್ಯಾಯಾಮವನ್ನು ಮಾಡಿ, ಅಲ್ಪಾಹಾರವನ್ನು ಮಾಡುತ್ತಿದ್ದನು. ಈ ಯಾವತ್ತು ನಿತ್ಯ ಕರ್ಮಗಳು ಮುಗಿದ ತರುವಾಯ ಅವನು ತನ್ನ ರಾಜ್ಯಕಾರಭಾರವನ್ನು ಮಾಡುತ್ತಿದ್ದನು. ಪ್ರದೋಷ ಕಾಲದಲ್ಲಿ (ಸಾಯಂಕಾಲದಲ್ಲಿ) ಅವನು ಪುನಃ ಸ್ನಾನ ಮಾಡಿ ಶಿವಪೂಜೆಯನ್ನು ಮಾಡುತ್ತಿದ್ದನು. ಅವನು ತಾನು ಯಾವ ಕೆಲಸವನ್ನು ಮಾಡುತ್ತಿದ್ದಾಗ್ಯೂ ಶಿವನ ಚರಣದ ಧ್ಯಾನವನ್ನು ಒಂದು ಕ್ಷಣ ಹೊತ್ತು ಸಹ ಮಾಡದೆ ಇರುತ್ತಿದ್ದಿಲ್ಲ.

**ಐಶ್ವರ್ಯವು ಮತ್ತು ಅಧಿಕಾರವು ಇದ್ದ ಮನುಷ್ಯನಿಗೆ ಬಹುಶಃ ಬುದ್ಧಿ ಭ್ರಂಶವಾಗಿ ಅವನ ಮನಸ್ಸು ಅವನನ್ನು ಯಾವಾಗಲು ದುರ್ವ್ಯಸನದ ಕಡೆಗೆ ಅಥವಾ ಪಾಪಕೃತ್ಯದ ಕಡೆಗೆ ಎಳಿಸುವದು. ಅವನ ಕಣ್ಣಿನ ಮೇಲೆ ಸೊಕ್ಕಿನ ಪರೆಯು ಬರುವದು. ಜಗತ್ತಿನಲ್ಲಿ ತನ್ನಕಿಂತ ಹೆಚ್ಚಿನವರು ಯಾರೂ ಇಲ್ಲೆಂದು ಅವನಿಗೆ ತೋರಲಿಕ್ಕೆ ಹತ್ತುವದು. "ಸಂಕಟ ಬಂದಾಗ ವೆಂಕಟರಮಣ" ಎಂಬಂತೆ ದಾರಿದ್ರ್ಯವು ಅಥವಾ ದುಃಖವು ಬಂದಾಗ್ಗೆ ಮನುಷ್ಯನು ಕ್ಷಣ ಕ್ಷಣಕ್ಕೆ ಪರಮೇಶ್ವರನ ಹೆಸರು ತೆಗೆದುಕೊ**

ಳ್ಳುವನು. ಆದರೆ ಆ ದುಃಖವು ಅಥವಾ ದಾರಿದ್ರ್ಯವು ನಿವಾರಣ ವಾದ ಕೂಡಲೆ ಅವನಿಗೆ ಪರಮೇಶ್ವರನ ಸ್ಮರಣವು ಸಹ ಉಳಿ ಯುವದಿಲ್ಲ. ಆದುದರಿಂದಲೇ ಸಾಧು ಸಜ್ಜನರು ಐಶ್ವರ್ಯವ ನ್ನೂ ಅಧಿಕಾರವನ್ನೂ ಧಿಕ್ಕರಿಸುತ್ತಾರೆ. ಅಧಿಕಾರ ಮತ್ತು ಐಶ್ವ ರ್ಯಗಳಲ್ಲಿ ಇಂಥ ಉನ್ಮತ್ತ ಗುಣವು ಇರುವದರಿಂದ ಇವುಗಳು ಇದ್ದಾಗ್ಯೂ ಯಾವನಲ್ಲಿ ಉನ್ಮತ್ತತನವು ಬರುವದಿಲ್ಲವೋ ಅಂಥ ವನೇ ಧನ್ಯನು! ಅಂಥವನೇ ಪೂಜ್ಯನು!

ಇಂಥ ಧನ್ಯ ಮತ್ತು ಪೂಜ್ಯರಾದ ಮನುಷ್ಯರೊಳಗೆ ಶ್ರೀಯಾಳರಾಜನ ಸಮಾವೇಶವಿರುವದು. ಈ ಪ್ರಕಾರ ಪರಮೇಶ್ವರನ ಭಕ್ತಿಯಲ್ಲಿ ತಲ್ಲೀನರಾಗಿ ರುವವರಲ್ಲಿ ಯಾವತ್ತು ಸದ್ಗುಣಗಳು ವಾಸವಾಗಿರುವದು ಸ್ವಾಭಾವಿಕವಿರು ವಂತೆ ಶ್ರೀಯಾಳರಾಜನಲ್ಲಿ ಯಾವತ್ತು ಸದ್ಗುಣಗಳು ವಾಸವಾಗಿದ್ದವು. ಯಾ ವತ್ತು ಪ್ರಾಣಿಮಾತ್ರರ ಬಗ್ಗೆ ಅವನಲ್ಲಿ ಅತ್ಯಂತ ದಯವು ಇತ್ತು. ಅವನು ತನ್ನ ಜೀವದಂತೆಯೇ ಎರಡನೆಯವರ ಜೀವವೆಂದು ತಿಳಿದುಕೊಂಡು ಯಾರಿ ಗೂ ತನ್ನಿಂದ ಕಿಂಚಿತ್ತಾದರೂ ದುಃಖವಾಗಬಾರದೆಂದು ಬಹಳ ದಕ್ಷತೆ ಯಿಂದ ನಡೆಯುತ್ತಿದ್ದನು. ಯಾವನಾದರೂ ದುಃಖಪೀಡಿತ ಮನುಷ್ಯನು ಅವನನ್ನು ಕಾಣಲಿಕ್ಕೆ ಬಂದರೆ ಅವನ ಜೀವವು ಬಹಳ ತಳಮಳಿಸಿ ಹೋಗು ತ್ತಿತ್ತು. ದುಃಖಪೀಡಿತರ ದುಃಖವನ್ನು ನಿವಾರಣ ಮಾಡುವ ವಿಷಯದಲ್ಲಿ ಅವನು ಯಾವಾಗಲು ತತ್ಪರನಿರುತ್ತಿದ್ದನು. ಪರದುಃಖ ನಿವಾರಣ ಮಾಡುವ ದರಿಂದ ತನಗೆ ಎಷ್ಟು ಕಷ್ಟವಾದಾಗ್ಯೂ ಅವನು ಅದರ ಕಡೆಗೆ ಏನೂ ವಿಚಾರ ಮಾಡುತ್ತಿದ್ದಿಲ್ಲ. ಜನರ ಸೌಖ್ಯದ ಕಡೆಗೆ ಲಕ್ಷ್ಯ ಕೊಡುವದರಿಂದಲೇ ಅವ ನಿಗೆ ಯಾವಾಗಲು ಸಮಾಧಾನವು ಮತ್ತು ಸಂತೋಷವು ಉಂಟಾಗುತ್ತಿದ್ದವು. ಅವನಲ್ಲಿ ದಯಾಳುತನವು ಇದ್ದಂತೆಯೇ ಕ್ಷಮೆ, ಶಾಂತಿ, ಧೈರ್ಯ, ಔದಾರ್ಯ

ಮುಂತಾದ ಸದ್ಗುಣಗಳು ಇದ್ದವು. ಎರಡನೆಯವರು ತನಗೆ ಎಷ್ಟು ಅಪರಾಧವನ್ನು ಮಾಡಿದಾಗ್ಯೂ ಅವನು ಅಂಥವರ ಮೇಲೆ ಸೇಡು ತೀರಿಸಿಕೊಳ್ಳುವ ಬಗ್ಗೆ ತನ್ನ ಮನಸ್ಸಿನಲ್ಲಿ ಎಂದೂ ವಿಚಾರ ಮಾಡುತ್ತಿದ್ದಿಲ್ಲ. **ಸುಖವು ಬಂದಾಗ ಸೊಕ್ಕಿನಿಂದ ಉಬ್ಬಿ ಹೋಗಿ ದುಃಖವು ಬಂದಾಗ ಕಸವಿಸಿ ಮಾಡಿ ಅಳುತ್ತ ಕುಳಿತುಕೊಳ್ಳುವದು ಸಾಮಾನ್ಯ ಮನುಷ್ಯರ ಗುಣವಿರುವದು. ಆದರೆ ಪರಮೇಶ್ವರನ ಭಕ್ತರು ಸುಖ ದುಃಖಗಳನ್ನೂ ಲಾಭ ಹಾನಿಗಳನ್ನೂ ಸಮನಾಗಿಯೇ ತಿಳಿದುಕೊಂಡು ಎರಡೂ ಕಾಲದಲ್ಲಿ ಶಾಂತಿಯಿಂದಲೇ ಆಚರಣ ಮಾಡುವರು. ಅವರು ತಮಗೆ ದುಃಖವು ಬಂದಾಗ್ಗೆ ಎಳ್ಳಷ್ಟಾದರೂ ಎದೆಗುಂದದೆ ಧೈರ್ಯದಿಂದಲೇ ಆ ದುಃಖವನ್ನು ನಿವಾರಣ ಮಾಡಲಿಕ್ಕೆ ಪ್ರಯತ್ನಮಾಡುವರು.** ಬೇಕಾದವರು ಬೇಕಾದುದನ್ನು ಬೇಡಲಿಕ್ಕೆ ಬಂದಾಗ್ಯೂ ಶ್ರೀಯಾಳನು ಅವರನ್ನು ಎಂದೂ ರಿಕ್ತ ಹಸ್ತದಿಂದ ತಿರುಗಿ ಕಳಿಸುತ್ತಿದ್ದಿಲ್ಲ. ಪ್ರವಾಸಿಗರಿಗಾಗಿಯೂ ಯಾತ್ರಸ್ಥರಿಗಾಗಿಯೂ ಅವನು ಅಲ್ಲಲ್ಲಿ ಅನ್ನಛತ್ರಗಳನ್ನು ಮತ್ತು ಅರವಟಿಗೆಗಳನ್ನು ಇಡಿಸಿದ್ದನು. ಯಾಚಕರಿಗೆ 'ಇಲ್ಲ' ವೆಂದು ಉತ್ತರ ಕೊಟ್ಟು ಅವರನ್ನು ವಿಮ್ನುಖರಾಗಿ ಮಾಡಿ ಕಳುಹಿಸುವದು ಎಷ್ಟು ಪಾಪವೋ ಅಷ್ಟೇ ಕಾರಣವಿಲ್ಲದೆ ಯಾಚನೆ ಮಾಡುವದು ಅಥವಾ ಎರಡನೆಯವರಲ್ಲಿ ಬಾಯಿ ತೆಗೆದು ಬೇಡುವದು ಪಾಪವೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಆದುದರಿಂದ ಶ್ರೀಯಾಳರಾಜನ ಕಾಲದಲ್ಲಿ ಭಿಕ್ಷೆ ಬೇಡುವದು ಜೀವನದ ಒಂದು ಉದ್ಯೋಗವು ಅಥವಾ ವೃತ್ತಿಯು ಆಗಿದ್ದಿಲ್ಲ. ಕುಂಟರು, ಕುರುಡರು, ಮೂಕರು, ಅನಾಥರು, ಅವಯವಹೀನರು, ನಿರ್ಬಲರು ಅಥವಾ ಸಂಕಟದಲ್ಲಿ ಬಿದ್ದವರು ಮಾತ್ರ ಆ ಕಾಲದಲ್ಲಿ ಯಾಚನೆಯನ್ನು ಮಾಡುತ್ತಿದ್ದರು. ಇಂಥ ಜನರಿಗೆ ಸಹಾಯ ಮಾಡುವದು ಯಾವಾಗಲು ಪುಣ್ಯಪ್ರದವೇ ಆಗಿರುವದು. ಆ ಕಾಲದಲ್ಲಿ ಪ್ರವಾಸಿಗರಿಗೂ ಯಾತ್ರಸ್ಥರಿಗೂ ಮಾ

ರ್ಗದಲ್ಲಿ ಬಹಳ ಪ್ರಯಾಸವು ತಟ್ಟುತ್ತಿತ್ತು. ಆದುದರಿಂದ ಅಂಥವರಿಗೆ ಸಹಾಯ ಮಾಡುವದು ಬಹಳ ಪುಣ್ಯವೆಂದು ಧರ್ಮಶಾಸ್ತ್ರದಲ್ಲಿ ಹೇಳಿದ್ದರ ಮರ್ಮವು ಇದೇ ಇರುತ್ತದೆ. ಗಾಯನದ ಕಾಲಕ್ಕೆ ಗಾಯನ ವಾದನ ಮಾಡುವವರು ಒಂದೇ ಸ್ವರದಿಂದ ಮತ್ತು ಒಂದೇ ತಾಳಗತ್ತಿನಿಂದ ಮಾಡಿದರೆ ಅದರಿಂದ ಹೇಗೆ ಕರ್ಣಾನಂದವಾಗುವದೋ ಹಾಗೆ ಸಂಸಾರದಲ್ಲಿ ಪತಿಪತ್ನಿಯರ ಮನಸ್ಸು ಧರ್ಮದ ಕಡೆಗೆ ಮತ್ತು ಪರೋಪಕಾರದ ಕಡೆಗೆ ಒಂದೇಸವನಾಗಿ ಇದ್ದರೆ ಅವರ ಕಡೆಯಿಂದ ಗೃಹಸ್ಥಾಶ್ರಮದ ಕೆಲಸಗಳು ಉತ್ತಮವಾಗಿ ಜರಗುವವು. **ಪತಿಪತ್ನಿಯರಲ್ಲಿ ಒಬ್ಬರು ಯಾರಾದರೂ ಕ್ಷುದ್ರ ಮನಸ್ಸಿನವರು ಅಂದರೆ ಪರಹಿತದ ಕಡೆಗೆ ದೃಷ್ಟಿಯನ್ನಿಡದೆ ಕೇವಲ ಸ್ವಾರ್ಥದ ಕಡೆಗೆ ನೋಡುವವರು ಇದ್ದರೆ ಅಂಥ ಪತಿಪತ್ನಿಯರ ಕಡೆಯಿಂದ ಸಾಕಷ್ಟು ಧರ್ಮಕಾರ್ಯವು ಅಥವಾ ಪುಣ್ಯಕಾರ್ಯವು ಲಭಿಸುವದಿಲ್ಲ. ಒಂದೇ ತರದ ಧಾರ್ಮಿಕ ಭಾವನೆಯುಳ್ಳ ಪತಿಪತ್ನಿಯರ ಜೋಡಿಯು ಕೂಡಬೇಕಾದರೆ ಹಿಂದಿನ ಜನ್ಮದ ಪುಣ್ಯವು ಇರಬೇಕಾಗುವದು.** ಇಂಥ ಪುಣ್ಯವು ಇದ್ದುದರಿಂದಲೇ ಶ್ರೀಯಾಳರಾಜನ ಪತ್ನಿಯಾದ ಚಾಂಗುಣಿಯು ಅವನಂತೆಯೇ ಬಹಳ ಧಾರ್ಮಿಕಳೂ ಈಶ್ವರ ಭಕ್ತಳೂ ಆಗಿದ್ದಳು. ಆದುದರಿಂದ ಈ ಗಂಡ ಹೆಂಡರಿಬ್ಬರು ಪರೋಪಕಾರದ ಅಥವಾ ಧರ್ಮದ ಕೆಲಸದಲ್ಲಿ ಯಾವಾಗಲು ತಮ್ಮ ಕೈಯನ್ನು ಮುಂದೆ ಮಾಡುತ್ತಿದ್ದರು. ಚಾಂಗುಣಿಯು ತನ್ನ ಕೈಯನ್ನು ಶ್ರೀಯಾಳರಾಜನಕಿಂತಲು ಒಂದು ಸ್ವಲ್ಪ ಮುಂದೆಯೇ ಮಾಡಿರುತ್ತಿದ್ದಳೆಂದು ಹೇಳಿದರೆ ಏನೂ ತಪ್ಪಾಗದು.

ಈ ಇಬ್ಬರಿಗೆ ಚಿಲ್ಲಾಳನೆಂಬ ಒಬ್ಬನೇ ಮಗನು ಇರುತ್ತಿದ್ದನು. **'ಭೂಮಿಯಂತೆ ಸಸಿಯು ಅಥವಾ ಬೀಜದಂತೆ ಅಂಕುರವು'**

ಎಂಬ ನಾಣ್ಣುಡಿಯು ಸುಳ್ಳಲ್ಲ. ಈ ಚಿಲ್ಲಾಳ ಬಾಲಕನು ತನ್ನ ಪುಣ್ಯಶೀಲ ರಾದ ತಂದೆ ತಾಯಿಗಳಂತೆಯೇ ಸದಾಚರಣಿಯೂ, ಪಾಪಭೀರುವೂ, ಈಶ್ವರ ಭಕ್ತನೂ, ಬಹು ಉದಾರನೂ, ತನ್ನ ಮನೆತನಕ್ಕೆ ಮತ್ತು ತನ್ನ ತಂದೆ ತಾಯಿ ಗಳಿಗೆ ಬಹಳ ಭೂಷಣಪ್ರಾಯನೂ ಇದ್ದನು. ಅವನು ಅಕ್ಷರಶಃ ಕುಲದೀ ಪಕನೇ ಆಗಿದ್ದನು. ಆದುದರಿಂದ ಶ್ರೀಯಾಳ, ಚಾಂಗುಣಿ ಮತ್ತು ಚಿಲ್ಲಾಳ ಈ ಮೂರೂ ಜನರ ಸಂಗಮವು ಪುಣ್ಯಪ್ರದವಾದ ತ್ರಿವೇಣೀ ಸಂಗಮವೇ ಆಗಿತ್ತೆಂದು ಹೇಳಲಿಕ್ಕೆ ಅಡ್ಡಿಯಿಲ್ಲ.

---

## ೨. ಶ್ರೀ ಶಂಕರನೂ ನಾರದನೂ.



ಒಂದಾನೊಂದು ದಿವಸ ಶ್ರೀ ಶಂಕರನು ಪಾರ್ವತೀ ಸಮೇತನಾಗಿ ಕೈಲಾಸದಲ್ಲಿ ಸ್ವಸ್ಥವಾಗಿ ಕುಳಿತುಕೊಂಡಾಗ್ಗೆ ನಾರದಮುನಿಯು ಸಂಚರಿ ಸುತ್ತ, ಸಂಚರಿಸುತ್ತ, ತನ್ನ ಕೈಯಲ್ಲಿ ವೀಣೆಯನ್ನು ಹಿಡಿದುಕೊಂಡು, ಅದನ್ನು ಬಾರಿಸುತ್ತಲೂ, ಬಾಯಿಂದ ಹರಿಭಜನವನ್ನು ಮಾಡುತ್ತಲೂ, ಅಲ್ಲಿಗೆ ಹೋದ ನು. ನಾರದನು ಅಲ್ಲಿಗೆ ಹೋದ ಕೂಡಲೆ ಶ್ರೀ ಶಂಕರನು ಅವನಿಗೆ ಆದರ ಮಾಡಿ ಕುಳ್ಳಿರಿಸಿಕೊಂಡನು. ಆಗ ಉಭಯತರು ತಮ್ಮ ಕುಶಲ ವರ್ತಮಾನಗ ಳನ್ನು ಮಾತಾಡಿದನಂತರ ಅಲ್ಲಿಯ ಇಲ್ಲಿಯ ಮಾತುಗಳನ್ನು ಆಡುತ್ತಿರುವಾಗ್ಗೆ ನಾರದನು ಶ್ರೀ ಶಂಕರನ ಮುಂದೆ ಶ್ರೀಯಾಳರಾಜನ ಸ್ತುತಿಯನ್ನು ಬಹಳ ವಾಗಿ ಮಾಡಿದನು. ನಾರದನು ಅಂದದ್ದೇನಂದರೆ:—“ಎಲೌ ಕೈಲಾಸನಾ ಥಾ! ಗಂಗಾಧರಾ! ಪಿನಾಕಪಾಣೀ! ಭಕ್ತವತ್ಸಲಾ! ನಾನು ತ್ರಿಲೋಕದಲ್ಲಿ ಸಂಚಾರಮಾಡಿ ನಿನ್ನ ಅನೇಕ ಮಂದಿ ಭಕ್ತರನ್ನು ನೋಡಿದೆನು. ಆದರೆ ಶ್ರೀ ಯಾಳನಂಥ ನಿನ್ನ ಭಕ್ತನನ್ನು ನಾನು ಎಲ್ಲಿಯೂ ನೋಡಲಿಲ್ಲ. ಅವನಲ್ಲಿಯ

ಧೈರ್ಯ, ಔದಾರ್ಯ, ಗಾಂಭೀರ್ಯ, ದಯಾ, ಕ್ಷಮಾ, ಶಾಂತಿ ಈ ಸದ್ಗುಣಗಳು ಅದ್ವಿತೀಯವಿರುವವು. ಅವನಿಗೆ ಸರಿಯಾದವರು ಯಾರೂ ಇಲ್ಲ. ಅವನು ಇವತ್ತಿಗೆ ಹತ್ತು ಸಾವಿರ ಅನ್ನಛತ್ರಗಳನ್ನು ಇಟ್ಟಿರುತ್ತಾನೆ. ಅವನ ಬಳಿಯಲ್ಲಿ ಯಾವದೇ ಬ್ರಾಹ್ಮಣರು, ಜಂಗಮರು, ಅತಿಥಿಗಳು, ಅಭ್ಯಾಗತರು ಹೋದಾಗ್ಯೂ ಅವನು ಅವರಿಗೆ ಇಚ್ಛಾಭೋಜನವನ್ನು ಮಾಡಿಸುತ್ತಾನೆ. ಅತಿಥಿಗಳು ಭೋಜನಕ್ಕೆ ಕುಳಿತಾಗ್ಗೆ ಅವರು ಬೇಡಿದ ಪದಾರ್ಥಗಳನ್ನು ವಿಶ್ವ ಪ್ರಯತ್ನ ಮಾಡಿ ಅವರಿಗೆ ತಂದು ಬಡಿಸಿ ಅವರ ಇಚ್ಛೆಯನ್ನು ಪೂರೈಸುವದು ಅವನ ವ್ರತವಿರುತ್ತದೆ. ಇಂಥ ಅತ್ಯಂತ ಧಾರ್ಮಿಕನಾದ ನಿಮ್ಮೀ ಭಕ್ತನು ಊರ್ವೀತಲದ ಮೇಲೆ ಇರುತ್ತಿರಲು ಅವನನ್ನು ನೀವು ಇನ್ನೂವರೆಗೆ ಜನ್ಮ ಮರಣಗಳ ಚಕ್ರದಿಂದ ಬಿಡಿಸಿ ನಿಮ್ಮ ಪಾದದ ಹತ್ತರ ತಂದುಕೊಳ್ಳದೆ ಇರುವದು ಬಹಳ ಆಶ್ಚರ್ಯದ ಸಂಗತಿಯದೆ.!" ಇದಕ್ಕೆ ಶ್ರೀ ಶಂಕರನು ಉತ್ತರ ಕೊಟ್ಟದ್ದೇನಂದರೆ:—"ಎಲೌ ನಾರದಮುನಿಯೇ! ನೀನು ಹೇಳುವದೆಲ್ಲ ನಿಜವಿರುವದು. ಆದರೆ ಅವನು ಎಂಥ ಕಠಿಣ ಪ್ರಸಂಗದಲ್ಲಿಯೂ ತನ್ನ ಸದಾಚರಣದಿಂದ ಭ್ರಷ್ಟನಾಗುವದಿಲ್ಲೆಂಬ ಬಗ್ಗೆ ಅವನ ಸತ್ವಪರೀಕ್ಷೆಯನ್ನು ನಾನು ಮಾಡತಕ್ಕವನಿದ್ದೇನೆ. ಆ ಪರೀಕ್ಷೆಯಲ್ಲಿ ಅವನು ತೇರ್ಗಡೆಯಾದನೆಂದರೆ ನಾನು ಅವನನ್ನು ಈ ಲೋಕಕ್ಕೆ ತರುವೆನು. ವರಿಹಚ್ಚಿ ಪರೀಕ್ಷಿಸದೆ ಯಾರ ಮೇಲೂ ಕೃಪೆಯನ್ನು ಮಾಡುವದು ಸರಿಯಾದುದಲ್ಲ. ಪರೀಕ್ಷೆಯ ಪ್ರಸಂಗವು ಬರುವತನಕ ಸನ್ಮಾರ್ಗದಿಂದ ನಡೆಯುವವರು ಅನೇಕ ಮಂದಿ ಸಿಗುವರು. ಆದರೆ ಅಂಥ ಪ್ರಸಂಗವು ಬಂದಕೂಡಲೆ ತಮ್ಮ ಶೀಲವನ್ನು ಭ್ರಷ್ಟ ಮಾಡದೆ ಇರುವವರು ಬಹಳ ವಿರಲ. ಲಕ್ಷದಲ್ಲಿ ಒಬ್ಬರು ಅಂಥವರು ಸಿಗುವರು. ಮೋಹದಲ್ಲಿ ಶಿಲ್ಕುವ ಪರಿಯಂತರ ತಮ್ಮ ಬಾಯಿಂದ ಧರ್ಮದ ಮತ್ತು ನೀತಿಯ ಜೊಳ್ಳು ಕೊಚ್ಚುವವರು ಅನೇಕರು ಇರುತ್ತಾರೆ. ಪ್ರಸಂ

ಗವು ಬಂದಾಗ್ಗೆ ವಜ್ರವು ಯಾವದು ಮತ್ತು ಕಾಜು ಯಾವದು ಎಂಬುವದರ ಪರೀಕ್ಷೆಯು ಆಗುತ್ತದೆ. ಪರೀಕ್ಷೆಯ ಹೊರತು ಯಾವತ್ತು ವ್ಯರ್ಥವಿರುತ್ತದೆ. ಪರೀಕ್ಷೆಯನ್ನು ಮಾಡುವಾಗ ಪರೀಕ್ಷೆಯನ್ನು ಮಾಡುವವರು ಕೇವಲ ನಿರ್ದಯಿಗಳೆಂದು ಅನ್ಯರಿಗೆ ಭಾಸವಾಗುವದು. ಆದರೆ ಒಮ್ಮೆ ಇಂಥ ಸತ್ವಪರೀಕ್ಷೆಯಲ್ಲಿ ತೇರ್ಗಡೆಯಾದರೆ ಅವರಿಗೆ ಅಕ್ಷಯ್ಯ ಸುಖವು ಪ್ರಾಪ್ತವಾಗುವದು. ಪರೀಕ್ಷೆಯ ಕಾಲಕ್ಕೆ ಅವರು ಅನುಭೋಗಿಸಬೇಕಾಗುವ ಯಾತನೆಗಳು ಅವರಿಗೆ ಆಮೇಲೆ ಪ್ರಾಪ್ತವಾಗುವ ಅಕ್ಷಯ್ಯ ಸುಖದ ಮುಂದೆ ಏನೂ ಅಲ್ಲ. ಅಗ್ನಿಯಲ್ಲಿ ಹಾಕದೆ ಚಿನ್ನದ ನಿಜಸ್ವರೂಪವು ಗೊತ್ತಾಗುವದಿಲ್ಲ. ಏಕೆ ನಾರದಾ? ಈ ನನ್ನ ಮಾತಿನ ಸತ್ಯತೆಯ ಬಗ್ಗೆ ನಿನ್ನ ಅಭಿಪ್ರಾಯವೇನದೆ?"

ಆಮೇಲೆ ನಾರದನು ಉತ್ತರ ಕೊಟ್ಟದ್ದೇನಂದರೆ:—"ಭೋ ಪಾರ್ವತೀರಮಣಾ! ಕೈಲಾಸನಾಥಾ! ನೀನು ಹೇಳಿದ್ದು ಅಕ್ಷರಶಃ ನಿಜವು. ನೀನು ಹೇಳಿದ ಪ್ರಕಾರ ಮೃತ್ಯುಲೋಕದಲ್ಲಿ ಬಾಯಿಂದ ಧರ್ಮದ ಮತ್ತು ನೀತಿಯ ನುಡಿಗಳನ್ನು ವೆಗ್ಗಳವಾಗಿ ನುಡಿದು ಪ್ರಸಂಗ ಬಂದಾಗ್ಗೆ ಆ ನುಡಿಗಳಿಗೆ ವಿಸಂಗತವಾಗಿ ನಡೆಯುವವರು ಅನೇಕ ಮಂದಿ ಇರುತ್ತಾರೆ. ಆದರೆ ಶ್ರೀಯಾಳನಿಗೆ ಇಂಥ ದೋಷಾರೋಪಣವನ್ನು ಮಾಡುವದು ಶುದ್ಧ ಪಾಪವದೆ. ಶ್ರೀಯಾಳನು ನಿಮ್ಮ ಸತ್ವಪರೀಕ್ಷೆಯಲ್ಲಿ ನಿಶ್ಚಯವಾಗಿ ಜಯಶೀಲನಾಗುವನೆಂದು ನನಗೆ ಸಂಪೂರ್ಣ ವಿಶ್ವಾಸವುಂಟು."

ಆ ಮೇಲೆ ಶ್ರೀ ಶಂಕರನು ನಾರದನಿಗೆ ಹೇಳಿದ್ದೇನಂದರೆ:—"ನಾರದ ಮುನಿಯೇ! ನೀನು ವರ್ಣಿಸಿದಂತೆ ಆ ನನ್ನ ಭಕ್ತನಾದ ಶ್ರೀಯಾಳರಾಜನು ಇರುವದೇ ಆದಲ್ಲಿ ನನಗೆ ಪರಮಸಂತೋಷವಾಗುವದು. ನನ್ನ ಭಕ್ತರಲ್ಲಿ ಇಂಥ ಪುಣ್ಯಶ್ಲೋಕರು ಎಷ್ಟು ಮಂದಿ ಹೊರಡುವರೋ ಅಷ್ಟು ನನಗೆ ಹೆಚ್ಚು ಅಭಿಮಾನದ ಮತ್ತು ಆನಂದದ ಸಂಗತಿಯು ಇರುತ್ತದೆ. ಆದುದರಿಂದ

ನಾನು ಇನ್ನು ವಿಲಂಬ ಮಾಡದೆ ನನ್ನ ವೇಷಾಂತರವನ್ನು ಮಾಡಿಕೊಂಡು ಆ ಶ್ರೀಯಾಳರಾಜನ ಸತ್ವಪರೀಕ್ಷೆಯ ಬಗ್ಗೆ ಹೊರಟು ಹೋಗುವೆನು."

ಈ ಪ್ರಕಾರ ಭಾಷಣವಾದ ನಂತರ ನಾರದನು ಇನ್ನೂ ಕೆಲವು ಇತರ ಮಾತುಗಳನ್ನಾಡಿ ಶ್ರೀ ಶಂಕರನ ಅಪ್ಪಣೆಯನ್ನು ಪಡೆದುಕೊಂಡು ಕೈಲಾಸ ದಿಂದ ಹೊರಟು ಹೋದನು.

---

## ೩. ಸತ್ವಪರೀಕ್ಷೆಯು.



ಆ ಬಳಿಕ ಶ್ರೀ ಶಂಕರನು ಒಬ್ಬ ವೃದ್ಧ ಮತ್ತು ಅಶಕ್ತ ವಿಪ್ರನ ವೇಷ ವನ್ನು ಧರಿಸಿ ಬಡಿಗಿಯನ್ನು ಊರುತ್ತ ಊರುತ್ತ ಬಹಳ ಕಷ್ಟದಿಂದ ಶ್ರೀಯಾ ಳರಾಜನ ಬಾಗಿಲಕ್ಕೆ ಬಂದನು. ಅಲ್ಲಿ ಶ್ರೀಯಾಳರಾಜನು ಆ ವಿಪ್ರನನ್ನು ಬಹಳ ಆದರಸತ್ಕಾರದಿಂದ ಒಳಗೆ ಕರೆದುಕೊಂಡು ಹೋಗಿ ಯೋಗ್ಯ ಸ್ಥಳದ ಮೇಲೆ ಕುಳ್ಳಿರಿಸಿದನು. ಅಲ್ಲಿ ಆ ವಿಪ್ರನು ಕೆಲವು ಹೊತ್ತು ವಿಶ್ರಾಂತಿಯನ್ನು ತೆಗೆದುಕೊಂಡನಂತರ ಶ್ರೀಯಾಳನು ಆ ಅತಿಥಿಯ ಮುಂದೆ ತನ್ನ ಎರಡೂ ಕೈ ಜೋಡಿಸಿ ವಿನಯದಿಂದ—"ಸ್ವಾಮಿನ್, ತಮ್ಮ ಅಪೇಕ್ಷೆಯು ಏನಿರು ತ್ತದೆ?" ಎಂದು ಅವನಿಗೆ ಕೇಳಿದನು. ಆಗ ಅವನು—"ರಾಜನೇ! ನಾನು ಬಹಳ ದಿವಸಗಳಾರಭ್ಯ ಉಪವಾಸದಿಂದ ಬಳಲುತ್ತೇನೆ. ನನಗೆ ಇಚ್ಛಾಭೋ ಜನವನ್ನು ಮಾಡಿಸು. ನಾನು ನಿನ್ನ ಕೀರ್ತಿಯನ್ನು ಕೇಳಿ ಬಹಳ ಆಶಾತುರ ನಾಗಿ ಬಂದಿರುತ್ತೇನೆ" ಎಂದು ನುಡಿದನು. ಆಗ ರಾಜನು—"ಸ್ವಾಮಿನ್! ಯಾವ ಪದಾರ್ಥಗಳ ಮೇಲೆ ತಮ್ಮ ಅಪೇಕ್ಷೆಯುಂಟೆಂಬುದನ್ನು ದಯ ಮಾಡಿ ನನಗೆ ತಿಳಿಸಬೇಕು. ತಮ್ಮ ಅಪೇಕ್ಷೆಯನ್ನು ಪೂರೈಸಲಿಕ್ಕೆ ಈ ದೀನ ಕಿಂಕರನು ಒಂದೇ ಕಾಲಿನ ಮೇಲೆ ಸಿದ್ಧನಿರುತ್ತಾನೆ" ಎಂದು ಕೇಳಿದನು.

ಅದಕ್ಕೆ ಆ ಅತಿಥಿಯು—“ರಾಜನೇ! ನಿನ್ನ ನಮ್ರತೆಯನ್ನೂ ಆದರಸತ್ಕಾರ ವನ್ನೂ ನೋಡಿ ನನಗೆ ಬಹಳ ಸಮಾಧಾನವಾಗಿರುತ್ತದೆ. ನನ್ನ ಅಪೇಕ್ಷೆಯು ಏನುಂಟೆಂಬುವದನ್ನು ಕೇಳಿಕೋ. ನನಗೆ ನರಮಾಂಸವನ್ನು ಭುಂಜಿಸಬೇ ಕೆಂಬ ಅಪೇಕ್ಷೆಯುಂಟಾಗಿರುತ್ತದೆ. ಆದರೆ ಆ ನರಮಾಂಸವು ಕಳ್ಳ, ಚಾಂ ಡಾಲ ಅಥವಾ ಪಾಪಿಷ್ಠ ಮನುಷ್ಯನದು ಇರಬಾರದು; ಅಥವಾ ಕ್ರಯಕೊ ಟ್ಟು ತಂದ ಮಾಂಸವಾದರೂ ಇರಬಾರದು” ಎಂದು ಉತ್ತರ ಕೊಟ್ಟನು. ಆ ಬಳಿಕ ರಾಜನು—“ಸ್ವಾಮಿನ್! ತಾವು ತಮ್ಮ ಮನಸ್ಸಿನಲ್ಲಿ ಏನೂ ಸಂಕೋ ಚವನ್ನು ಮಾಡಿಕೊಳ್ಳಬಾರದು. ತಮ್ಮ ಅಪೇಕ್ಷೆಯು ಬೇಕಾದದ್ದು ಇದ್ದಾ ಗ್ಯೂ ಅದನ್ನು ಸ್ಪಷ್ಟವಾಗಿ ತಿಳಿಸಬೇಕು. ನಾನು ತಮ್ಮ ಮನೋರಥವನ್ನು ಪೂರ್ಣ ಮಾಡಲಿಕ್ಕೆ ಸಿದ್ಧನಿರುತ್ತೇನೆ” ಎಂದು ಹೇಳಿದನು. ಇದನ್ನು ಕೇಳಿ ಶ್ರೀ ಶಂಕರನು ಅತ್ಯಂತ ಪ್ರಸನ್ನತೆಯಿಂದ—“ರಾಜನೇ! ನೀನು ನನ್ನ ಮ ನೋರಥವನ್ನು ಪೂರೈಸಲಿಕ್ಕೆ ಸಿದ್ಧನಿದ್ದರೆ ನಿನ್ನ ಮಾಯಾಮಮತೆಗಳನ್ನು ಬಿಟ್ಟುಕೊಟ್ಟು ನಿನ್ನ ಪುತ್ರನಾದ ಚಿಲ್ಲಾಳನ ಮಾಂಸವನ್ನು ಕುದಿಸಿ ತಂದು ನನಗೆ ಬಡಿಸು. ಆ ಮಾಂಸವನ್ನು ನಿನ್ನ ಪತ್ನಿಯು ತನ್ನ ಸ್ವಂತ ಕೈಯಿಂದಲೇ ಅಡಿಗೆ ಮಾಡಿ ಅದನ್ನು ನನಗೆ ಬಡಿಸಬೇಕು. ಈ ಪ್ರಕಾರ ಮಾಡಿದರೆ ಮಾತ್ರ ನಾನು ಭೋಜನ ಮಾಡುವೆನು. ಇಲ್ಲದಿದ್ದರೆ ನಿನ್ನ ಸತ್ವವನ್ನು ಹರಣ ಮಾಡಿ ನಾನು ಇಲ್ಲಿಂದ ಹೊರಟು ಹೋಗುವೆನು. ನಾನು ಕ್ಷುಧೆಯಿಂದ ಬಹಳ ಪೀಡಿತನಾಗಿರುವದರಿಂದ ವಿಲಂಬ ಮಾಡದೆ ನನಗೆ ಭೋಜನ ಮಾಡಿಸಿ ನನ್ನನ್ನು ತೃಪ್ತಿಪಡಿಸು. ಇಲ್ಲದಿದ್ದರೆ ಇಗೋ ನೋಡು, ಇಲ್ಲಿಂದ ತೀವ್ರ ವಾಗಿ ಹೊರಟು ಹೋಗುವೆನು” ಎಂದು ಹೇಳಿದನು. ಶ್ರೀಯಾಳನು ಬಹಳ ವಿಚಾರಸಂಪನ್ನನು ಮತ್ತು ಧೈರ್ಯಶಾಲಿಯು ಇದ್ದಾಗ್ಯೂ ಅವನು ಆ ಅತಿ ಥಿಯ ಮಾತನ್ನು ಕೇಳಿ ಪುತ್ರಮೋಹದಿಂದ ಗೊಂದಲದಲ್ಲಿ ಬಿದ್ದನು. ಅವ

ನಿಗೆ ಕೆಲವು ಹೊತ್ತು ಏನೂ ಸೂಚಿಸದಂತೆ ಆಯಿತು. ಆದರೆ ಅವನು ಬಹಳ ಸತ್ವಶೀಲನು ಮತ್ತು ವಿಚಾರ ಸಂಪನ್ನನು ಇದ್ದ ಕಾರಣ ತನ್ನ ಯಾವತ್ತು ದುಃಖವನ್ನು ನುಂಗಿಕೊಂಡು--"ಸ್ವಾಮಿನ್! ನನಗೆ ಒಬ್ಬನೇ ಮಗನು ಇರುತ್ತಾನೆ. ನನ್ನ ಮಗನ ಮಾಂಸವೊಂದು ಮಾತ್ರ ಬೇಡಬಾರದು. ನನ್ನ ಸ್ವಂತ ದೇಹದ ಮಾಂಸವನ್ನು ನಾನು ತಮಗೆ ಸಂತೋಷದಿಂದ ಅರ್ಪಣ ಮಾಡುತ್ತೇನೆ. ಅದನ್ನು ತಾವು ಸ್ವೀಕಾರ ಮಾಡಬೇಕು" ಎಂದು ಬೇಡಿ ಕೊಂಡನು. ಅದಕ್ಕೆ ಆ ಅತಿಥಿಯು—"ರಾಜನೇ! ನಿನ್ನ ಮಾಂಸವು ನನಗೆ ಬೇಡ. ಅದನ್ನು ನಾನು ಕೈಯಿಂದ ಸಹ ಮುಟ್ಟಲಾರೆನು" ಎಂದು ನಿಷ್ಠುರ ವಾಗಿ ನುಡಿದನು. ಶ್ರೀಯಾಳನ ಪತ್ನಿಯಾದ ಚಾಂಗುಣೆಯು ಈ ಇಬ್ಬರ ಮಾತನ್ನು ಕೇಳಿ ಅಂತಃಪುರದಿಂದ ಹೊರಗೆ ಬಂದು—"ಸ್ವಾಮಿೊ, ಅತಿಥಿ ಮಹಾರಾಯರೇ, ತಮ್ಮ ಅಡ್ಡಿಯು ಇಲ್ಲದಿದ್ದರೆ ನಾನು ನನ್ನ ಸ್ವಂತ ದೇಹ ವನ್ನು ತಮ್ಮ ಚರಣಕಮಲಗಳಿಗೆ ಅರ್ಪಿಸಲಿಕ್ಕೆ ಸಿದ್ಧಳಿರುತ್ತೇನೆ. ಇದನ್ನು ತಾವು ದಯಮಾಡಿ ಸ್ವೀಕಾರ ಮಾಡಬೇಕು. ಅಂದರೆ ನನ್ನ ಮಾತಾಪಿತೃ ಗಳ ಮತ್ತು ನನ್ನ ಪತಿಯು ಕುಲೋದ್ಧಾರವನ್ನು ಮಾಡಿದಂತಾಗುವದು" ಎಂದು ಬಹಳ ವಿನಯಪೂರ್ವಕವಾಗಿ ಬೇಡಿಕೊಂಡಳು. ಈ ಅವಳ ನಮ್ರ ಪೂರ್ವಕವಾದ ಭಾಷಣವನ್ನು ಕೇಳಿ ಆ ಅತಿಥಿಯು ಅಂದದ್ದೇನಂದರೆ-- "ನೀವಿಬ್ಬರೂ ಗಂಡಹೆಂಡರು ಬಹಳ ಉದಾರರೂ ಪರೋಪಕಾರಿಗಳೂ ಇರು ತ್ತೀರಿ. ನಿಮ್ಮಂಥವರ ಮಾಂಸವನ್ನು ನಾನು ಭಕ್ಷಣ ಮಾಡುವದು ಸರಿ ಯಾದುದಲ್ಲ. ನೀವುಭಯತರು ಇರದಿದ್ದರೆ ಎಷ್ಟೋ ಅನ್ನಛತ್ರಗಳು ಇಲ್ಲ ದಂತಾಗುವವು. ಇದರಿಂದ ಸಾವಿರಾರು ದೀನ ಮತ್ತು ಅನಾಥ ಜನರ ಶಾಪವು ನನಗೆ ಬಡೆದುಕೊಂಡೀತು. ಆದುದರಿಂದ ನಿಮ್ಮ ಐದು ವರ್ಷದ ಬಾಲಕ ನಾದ ಚಿಲಿಯಾಳನ ಮಾಂಸದ ಭೋಜನವನ್ನು ನನಗೆ ಮಾಡಿಸಿರಿ. ನನಗೆ

ಎರಡನೇದ್ದು ಏನೂ ಬೇಕಾಗಿಲ್ಲ." ಈ ಪ್ರಕಾರ ಆ ಅತಿಥಿಯು ಮಾತಾಡುತ್ತಿರುವಷ್ಟರಲ್ಲಿ ಚಿಲಿಯಾಳನು ಅಲ್ಲಿಗೆ ಬಂದು ಆ ಅತಿಥಿ ಮಹಾರಾಯನಿಗೆ ನಮಸ್ಕಾರಮಾಡಿ ಅವನ ಅಪೇಕ್ಷೆಯನ್ನು ಕೇಳಿಕೊಂಡ ಕೂಡಲೆ ಅವನು ಪ್ರೇಮದಿಂದ ತನ್ನ ತಂದೆತಾಯಿಗಳ ಕೈಯನ್ನು ಹಿಡಿದು—"ಪಿತನೇ! ಮಾತೆಯೇ! ಇದರಿಂದ ನೀವೇಕೆ ಇಷ್ಟು ವಿಚಾರದಲ್ಲಿ ಬಿದ್ದಿರುವಿರಿ? ಅತಿಥಿ ಮಹಾರಾಯನ ಅಪೇಕ್ಷೆಯನ್ನು ಕಿವಿಯಿಂದ ಕೇಳಿ ನನಗೆಷ್ಟು ಆನಂದವಾಗಿರುತ್ತದೆಂದು ಹೇಳಲಿ? ನನ್ನ ಮಾತಾಪಿತೃಗಳ ಮತ್ತು ನನ್ನ ಕುಲದ ಸತ್ವವನ್ನು ಕಾಪಾಡುವದಕ್ಕಾಗಿ ನನ್ನ ದೇಹದ ಉಪಯೋಗವಾಗುವದಕ್ಕಿಂತ ನನಗೆ ಹೆಚ್ಚಿನ ಕರ್ತವ್ಯವು ಇನ್ನಾವದು ಇರುತ್ತದೆ? ಇದರಿಂದ ನಾನೆಷ್ಟು ಧನ್ಯನಾಗುವೆನು? ಆದುದರಿಂದ ನೀವೆಷ್ಟು ಮಾತ್ರಕ್ಕೂ ಅನುಮಾನ ಮಾಡದೆ ನನ್ನ ಮಾಂಸವನ್ನು ಈ ಅತಿಥಿಗೆ ಸಮರ್ಪಿಸಿರಿ. ಅಂದರೆ ಕೈಲಾಸನಾಥನು ಸಂತುಷ್ಟನಾಗುವನು. ನೀವು ಯತ್ಕಿಂಚಿತ್ತಾದರೂ ಖೇದಪಡಬೇಡಿರಿ" ಎಂದು ಅವರಿಗೆ ಹೇಳಿದನು. ಈ ರೀತಿಯಿಂದ ಆ ಸದ್ಗುಣಿಯಾದ ಚಿಲ್ಲಾಳನು ಮಾತಾಡುವದನ್ನು ಕೇಳಿ ಆ ಅತಿಥಿ ವೇಷಧಾರಿಯಾದ ಶ್ರೀ ಶಂಕರನಿಗೆ ಅತ್ಯಾನಂದವಾಯಿತು. ಆದರೆ ಅವನು ಅದನ್ನು ಹೊರಗೆ ಏನೂ ತೋರಿಸಿಗೊಡದೆ ಶ್ರೀಯಾಳನಿಗೂ ಚಾಂಗುಣಿಗೂ ಹೇಳಿದ್ದೇನಂದರೆ:—"ಈ ಅರ್ಭಕನು ನನ್ನ ಇಚ್ಛೆಯನ್ನು ತೃಪ್ತಪಡಿಸಲಿಕ್ಕೆ ಸಿದ್ಧನಿರುವಾಗ ನೀವೇಕೆ ವ್ಯರ್ಥವಾಗಿ ಅಡ್ಡಬರುತ್ತೀರಿ? ನೀವು ವಿಲಂಬ ಮಾಡದೆ ಈ ಹುಡುಗನನ್ನು ಕೊಂದು ಅವನ ಮಾಂಸವನ್ನು ನನಗೆ ಪಾಕ ಮಾಡಿ ನನಗೆ ಭೋಜನ ಮಾಡಿಸಿರಿ. ಇದು ನಿಮ್ಮ ಕೈಯಿಂದ ಆಗದಿದ್ದರೆ ನನಗೆ ಸ್ಪಷ್ಟವಾಗಿ 'ನಿಮ್ಮಿಂದ ಆಗುವದಿಲ್ಲ' ಎಂದು ಉತ್ತರ ಕೊಡಿರಿ. ಅಂದರೆ ನಾನು ಈಗಲೇ ನಿಮ್ಮ ಸತ್ವಹರಣ ಮಾಡಿ ಇಲ್ಲಿಂದ ಹೊರಟು ಹೋಗುತ್ತೇನೆ" ಎಂದು ನಿಷ್ಠುರವಾಗಿ ಹೇಳಿದನು.

---

# ೪. ಪರೀಕ್ಷೆಯು ಪರಿಸಮಾಪ್ತಿಯು.



ಆ ಅತಿಥಿಯು ಈ ಪ್ರಕಾರ ನಿಷ್ಠುರವಾಗಿ ನುಡಿದುದನ್ನು ಕೇಳಿ ಶ್ರೀಯಾಳನೂ ಅವನ ರಾಣಿಯಾದ ಚಾಂಗುಣಿಯೂ ತಮ್ಮ ಸುಕುಮಾರನಾದ ಚಿಲ್ಲಾಳನ ಮಾಂಸವನ್ನು ತಾವು ಕೊಡದಿದ್ದರೆ ಅವನು ಶಾಂತನಾಗುವದಿಲ್ಲೆಂದು ನೋಡಿ ಅವನ ಇಚ್ಛೆಯನ್ನು ತೃಪ್ತಿಪಡಿಸಬೇಕೆಂದು ಕೊನೆಗೆ ನಿಶ್ಚಯ ಮಾಡಿದರು. ಆಮೇಲೆ ಚಾಂಗುಣಿಯು ಶ್ರೀಯಾಳರಾಜನ ಅಪ್ಪಣೆಯ ಮೇರೆಗೆ ತನ್ನ ಐದು ವರ್ಷ ಪ್ರಾಯದ ಮಗನಾದ ಚಿಲ್ಲಾಳನನ್ನು ಬಗಲೊಳಗೆ ಕುಳ್ಳಿರಿಸಿಕೊಂಡು ಪಾಕಶಾಲೆಗೆ ಹೋದಳು. ಅಲ್ಲಿ ಚಾಂಗುಣಿಯು ಚಿಲ್ಲಾಳನ ಮುಖದ ಕಡೆಗೆ ಬಾರಿ ಬಾರಿಗೆ ನೋಡಿ ಅವನ ಚುಂಬನವನ್ನು ತೆಗೆದುಕೊಂಡು, ಅಷ್ಟರಿಂದ ಸಮಾಧಾನವಾಗದೆ, ಪುನಃ ಮುಖವನ್ನು ನೋಡಿ—"ನಾನೇ ನನ್ನ ಕೈಯಿಂದ ನನ್ನ ಸುಕುಮಾರನ ಕಂಠವನ್ನು ಛೇದಿಸಿ ಅವನ ಮಾಂಸವನ್ನು ತೆಗೆದು, ಪಾಕವನ್ನು ಸಿದ್ಧಮಾಡಿ, ವಿಪ್ರವರ್ಯನಿಗೆ ನೀಡುವ ಪ್ರಸಂಗವು ಬಂದಿತೇ?" ಎಂದು ಶೋಕ ಮಾಡಲಿಕ್ಕೆ ಹತ್ತಿ ಒಂದೇಸವನೆ ಕಣ್ಣೀರು ಸುರಿಸಿದಳು. ಆಗ ಚಿಲ್ಲಾಳನು ಅವಳಿಗೆ—"ತಾಯಿ! ನೀನು ಈ ಪ್ರಕಾರ ಶೋಕವನ್ನು ಮಾಡುವದು ಉಚಿತವಲ್ಲ. ಸತ್ವರಕ್ಷಣದಕಿಂತಲು ಈ ಮೃಣಮಯವಾದ ಪುತ್ರನ ದೇಹವು ಹೆಚ್ಚಿನದಲ್ಲ. ನಾನು ನನ್ನ ದೇಹವನ್ನು ಆನಂದದಿಂದ ವಿಪ್ರವರ್ಯನಿಗೆ ಅರ್ಪಿಸಿದರೆ ಸಾಕ್ಷಾತ್ ಶ್ರೀ ಶಂಕರನಿಗೆ ಸಂತೋಷವಾಗುವದು" ಎಂದು ಸಮಾಧಾನ ಮಾಡಿದನು. ಚಿಲ್ಲಾಳನ ಈ ಮನೋಹರವಾದ ವೇದಾಂತವಚನ ಶ್ರವಣದಿಂದ ಚಾಂಗುಣಿಯ ದುಃಖವು ದ್ವಿಗುಣಿತವಾಯಿತು. ಆವಳ ಚಿತ್ತವು ಮತ್ತಿಷ್ಟು ವಿಭ್ರಮವಾಗಿ ಅವಳು ಶೋಕ ಮಾಡಹತ್ತಿದಳು. ಆಗ ಚಿಲ್ಲಾಳನು ತನ್ನ ತಾಯಿಗೆ ಪುನಃ—"ಮಾ

ತೇ! ನೀನು ಸಾಮಾನ್ಯ ಜನರಂತೆ ಈ ಪ್ರಕಾರ ಶೋಕ ಮಾಡುವದನ್ನು ಬಿಡು. ಕರ್ತವ್ಯವನ್ನು ಮರೆತು ಬಿಟ್ಟು ಈ ಪ್ರಕಾರ ಶೋಕ ಮಾಡುವದು ನಿನ್ನಂಥ ವಳಿಗೆ ಶ್ಲಾಘ್ಯವಲ್ಲ. ಈ ಸಮಯದಲ್ಲಿ ನಾವು ನಮ್ಮ ಸತ್ವವನ್ನು ರಕ್ಷಣ ಮಾಡಿಕೊಂಡರೆ ಪರಮೇಶ್ವರನ ಕೃಪೆಯಿಂದ ನಾನು ಈ ನಿನ್ನ ಪುಣ್ಯ ಗರ್ಭ ದಲ್ಲಿ ಪುನಃ ಹುಟ್ಟಿ ನಿನಗೆ ಸುಖವನ್ನು ಕೊಡುವೆನು. ಆದುದರಿಂದ ನೀನು ಇನ್ನುಮೇಲೆ ಮಾಯಾಜಾಲಕ್ಕೆ ಒಳಗಾಗದೆ ತೀವ್ರವಾಗಿ ನನ್ನ ಶಿರಚ್ಛೇ ದವನ್ನು ಮಾಡು. ನೀನು ಹೀಗೆ ಮಾಡಲಿಕ್ಕೆ ವಿಲಂಬ ಮಾಡಿದರೆ ಅತಿಥಿ ಮಹಾರಾಯನು ನಮ್ಮೆಲ್ಲರ ಮೇಲೆ ಸಿಟ್ಟಾಗಿ ನಮ್ಮ ಸತ್ವವನ್ನು ಹರಣ ಮಾಡಿ ಕೊಂಡು ಹೋಗುವನು" ಎಂದು ಅಂಗಲಾಚಿ ಬೇಡಿಕೊಂಡನು. ಆಗ ಚಾಂ ಗುಣೆಯು ತನ್ನ ಪುತ್ರನ ತೇಜಸ್ವಿ ನುಡಿಗಳನ್ನು ಕೇಳಿ ಎಚ್ಚರಿಕೆಯ ಮೇಲೆ ಬಂದು, ತನ್ನ ಮನಸ್ಸನ್ನು ಕಲ್ಲಿನಕಿಂತಲು ಕಠಿಣ ಮಾಡಿ, ಪುತ್ರನ ಶಿರಚ್ಛೇದ ಮಾಡಿದಳು! ಆ ಮೇಲೆ ಅವಳು ಪುನಃ ಮೋಹದಿಂದ ತನ್ನ ಪುತ್ರನ ನಿರ್ಜೀವ ಮುಖವನ್ನು ತನಗೆ ನೋಡಲಿಕ್ಕೆ ಇಟ್ಟುಕೊಂಡು, ಉಳಿದ ಅವನ ಶರೀರ ವನ್ನು ಕುದಿಸಿ, ಪಾಕವನ್ನು ಸಿದ್ಧ ಮಾಡಿ, ಅದನ್ನು ಒಂದು ತಾಟಿನಲ್ಲಿ ಬಡಿಸಿ ಕೊಂಡು ತನ್ನ ಪತಿಯೊಂದಿಗೆ ಅತಿಥಿಯ ಮುಂದೆ ಒಯ್ದು ಇಟ್ಟು—"ಸ್ವಾ ಮಿನ್! ತಮ್ಮ ಆಜ್ಞೆಯ ಪ್ರಕಾರ ಪುತ್ರ ಮಾಂಸವನ್ನು ಸಿದ್ಧಮಾಡಿ ತಂದಿರು ತ್ತೇನೆ. ದಯಮಾಡಿ ಇದನ್ನು ಸ್ವೀಕಾರ ಮಾಡಬೇಕು" ಎಂದು ಬೇಡಿಕೊಂ ಡಳು. ಆಗ ಆ ಅತಿಥಿಯು ಆ ತಾಟಿನ ಕಡೆಗೆ ಸೂಕ್ಷ್ಮವಾಗಿ ನೋಡಿದಂತೆ ಮಾಡಿ ಕ್ರೋಧಾವೇಶದಿಂದ—"ಚಾಂಗುಣೀ! ನೀನು ಮಹಾ ವಂಚಕಳು. ಈ ತಾಟಿನಲ್ಲಿ ನಿನ್ನ ಪುತ್ರನ ಶಿರಸ್ಸು ಕಾಣಲೊಲ್ಲದು. ಶರೀರದ ಎಲ್ಲ ಅವಯ ವಗಳಲ್ಲಿ ಶಿರಸ್ಸೇ ಮುಖ್ಯವಾದದು. ಅದನ್ನು ನೀನು ಮೋಹಕ್ಕಾಗಿ ಬಚ್ಚಿಟ್ಟಿ ರುವೆ. ಅಂದಮೇಲೆ ಈ ನೀಚ ಭೋಜನವನ್ನು ನಾನು ಹೇಗೆ ಸ್ವೀಕಾರ ಮಾ

ಡಲಿ?” ಎಂದನು. ಆಗ ಶ್ರೀಯಾಳರಾಜನು ಭಯಭೀತನಾಗಿ ಚಾಂಗುಣಿಗೆ– “ಪ್ರಿಯಸಖೀ! ಅತಿಥಿ ಮಹಾರಾಯನು ನುಡಿದುದಕ್ಕೆ ನಿನ್ನ ಉತ್ತರವೇನದೆ?” ಎಂದು ವಿಚಾರಿಸಲು ಚಾಂಗುಣಿಯು—“ರಾಜನೇ! ನಾನು ಪುತ್ರಮೋಹ ದಿಂದ ನನ್ನ ಪುತ್ರನ ಮುಖಾವಲೋಕನ ಮಾಡಲಿಕ್ಕೆ ಅವನ ಶಿರಕಮಲವ ನ್ನು ಬಚ್ಚಿಟ್ಟಿದ್ದು ಸತ್ಯವದೆ” ಎಂದು ಒಪ್ಪಿಕೊಂಡಳು. ಆಗ ಅತಿಥಿಯು— “ರಾಜನೇ! ನಿನ್ನ ಹೆಂಡತಿಯ ಕಪಟತನವನ್ನು ನೋಡಿದಿಯಾ? ನಾನು ನಿಮ್ಮ ಮನೆಯಲ್ಲಿ ಭೋಜನವನ್ನು ಗ್ರಹಣ ಮಾಡಲಾರೆನು. ಇಗೋ ನೋ ಡು! ನಿನ್ನ ಸತ್ವವನ್ನು ಹರಣ ಮಾಡಿಕೊಂಡು ಇಲ್ಲಿಂದ ಹೊರಟೆನು” ಎಂದು ಹೇಳಿ ಅಲ್ಲಿಂದ ಹೊರಟು ಹೋಗಲಿಕ್ಕೆ ಹತ್ತಿದನು. ಆಗ ಉಭಯತರೂ ಅತಿ ಥಿಯ ಪಾದಕ್ಕೆ ನಮಸ್ಕರಿಸಿ—“ಸ್ವಾಮಿನ್! ನಮ್ಮ ಅಪರಾಧವನ್ನು ಕ್ಷಮಿ ಸಬೇಕು. ಅಜ್ಞಾನದಿಂದ ಆದ ಕೆಲಸವನ್ನು ಲಕ್ಷ್ಯದಲ್ಲಿ ತೆಗೆದುಕೊಳ್ಳಬಾ ರದು. ಈಗಲೇ ಆ ಶಿರಸ್ಸನ್ನು ತಂದು ಅದರ ಪಾಕವನ್ನು ಮಾಡಿ ಅದನ್ನು ಸಹ ತಮ್ಮ ತಾಟಿನಲ್ಲಿ ಬಡಿಸುತ್ತೇವೆ” ಎಂದು ಆ ಅತಿಥಿಗೆ ಹೇಳಿಕೊಂಡರು. ಆಗ ಆ ಅತಿಥಿಯು ಪುನಃ ತನ್ನ ಸ್ಥಳದ ಮೇಲೆ ಬಂದು ಕುಳಿತು ಚಾಂಗುಣಿಗೆ– “ನೀನು ನಿನ್ನ ಮಗನ ಶಿರಸ್ಸನ್ನು ಇಲ್ಲಿಗೆ ತೆಗೆದುಕೊಂಡು ಬಂದು ನನ್ನ ಸಮ ಕ್ಷವೇ ಕುಟ್ಟಬೇಕು. ಹಾಗೂ ಆ ಪ್ರಕಾರ ಮಾಡುವಾಗ್ಗೆ ಕಿಂಚಿತ್ತಾದರೂ ದುಃಖಮಾಡಬಾರದು ಅಥವಾ ಕಣ್ಣೀರು ಉದುರಿಸಬಾರದು. ಈ ಪ್ರಕಾರ ನೀನು ನಡೆದರೆ ಮಾತ್ರ ನಾನು ನಿಮ್ಮಲ್ಲಿ ಭೋಜನಮಾಡುವೆನು” ಎಂದು ಹೇಳಿದನು. ಅದರಂತೆ ನಡೆಯಲಿಕ್ಕೆ ರಾಜನು ಸಹ ಚಾಂಗುಣಿಗೆ ಅಪ್ಪಣೆ ಯನ್ನಿತ್ತನು. ಕೂಡಲೇ ಅವಳು ಪಾಕಶಾಲೆಯೊಳಗೆ ಹೋಗಿ ತಾನು ಮೋ ಹದಿಂದ ಬಚ್ಚಿಟ್ಟಿದ್ದ ತನ್ನ ಬಾಲಕನ ಶಿರಸ್ಸನ್ನು ಹೊರಗೆ ತೆಗೆದುಕೊಂಡು ಬಂದು ಮಂಗಲ ಹಾಡುಗಳನ್ನು ಹಾಡುತ್ತ ಅದನ್ನು ಕುಟ್ಟಿ ಹಣ್ಣುಮಾಡಿ

ಅತಿಥಿಯು ಮುಂದೆ ತಂದಿಟ್ಟು ಅವನಿಗೆ—"ಹೇ ಭಗವನ್! ಕರುಣಾನಿಧಿಯೇ! ದೀನೋದ್ಧಾರನೇ! ತಾವು ಇದನ್ನು ಗ್ರಹಣ ಮಾಡಬೇಕು" ಎಂದು ಪ್ರಾರ್ಥನೆ ಮಾಡಿದಳು. ಆಗ ಅತಿಥಿಯು ಶ್ರೀಯಾಳರಾಜನಿಗೆ—"ಎಲೈ ಶ್ರೀಯಾಳಭೂಪಾಲನೇ! ನೀನೂ ನಿನ್ನ ಪ್ರಿಯ ಪತ್ನಿಯಾದ ಚಾಂಗುಣೆಯೂ ನನ್ನ ಪಂಗ್ತಿಗೆ ಭೋಜನಕ್ಕೆ ಕುಳಿತುಕೊಳ್ಳಬೇಕು" ಎಂದು ಹೇಳಿದನು. ಆಗ ಶ್ರೀಯಾಳರಾಜನು ತನ್ನ ಪ್ರಿಯ ಪುತ್ರನ ಮಾಂಸವನ್ನು ಹೇಗೆ ಭಕ್ಷಣ ಮಾಡಬೇಕೆಂದು ಕಣ್ಣೀರು ಉದುರಿಸಲಿಕ್ಕೆ ಹತ್ತಿದನು ಆಗ ಚಾಂಗುಣೆಯು ಶ್ರೀಯಾಳರಾಜನಿಗೆ—"ಪ್ರಾಣನಾಥರೇ! ಈಗ ಮನಸ್ಸಿನಲ್ಲಿ ಏನೂ ತರಬಾರದು. ನಾನು ಇದ್ದ ಒಬ್ಬ ಮಗನ ಶಿರಚ್ಛೇದವನ್ನು ಮಾಡಿ ನನ್ನ ಕೈಯಿಂದಲೇ ಅವನ ಮಾಂಸವನ್ನು ಸಿದ್ಧಮಾಡಿಕೊಂಡು ಸಹ ಬಂದೆನು. ಈಗ ನಾವು ಅತಿಥಿ ಮಹಾರಾಯನ ಪಂಗ್ತಿಯಲ್ಲಿ ಕುಳಿತು ಭೋಜನ ಮಾಡಲಿಕ್ಕೆ ಸಿದ್ಧರಾಗದಿದ್ದರೆ ಅತಿಥಿ ಮಹಾರಾಯನು ಸಿಟ್ಟಿಗೆದ್ದು ನಮ್ಮ ಸತ್ವಹರಣ ಮಾಡಿ ಹೋಗುವನು. ನಮ್ಮ ಹೊಟ್ಟೆಯ ಮಗನನ್ನು ನಾವು ಹೊಟ್ಟೆಯಲ್ಲಿ ಹಾಕಿಕೊಳ್ಳಲಿಕ್ಕೆ ಏನೂ ಅಡ್ಡಿಯು ಕಾಣುವದಿಲ್ಲ. ನಾವು ನಮ್ಮ ಜೀವವಿರುವವರೆಗೆ ಹೇಗೂ ನಮ್ಮ ಸತ್ವರಕ್ಷಣ ಮಾಡಿಕೊಳ್ಳಲಿಕ್ಕೇಬೇಕು" ಎಂದು ಹೇಳಿದಳು. ಶ್ರೀಯಾಳರಾಜನು ಚಾಂಗುಣೆಯ ಸಮಾಧಾನೋಕ್ತಿಯನ್ನು ಕೇಳಿ ಅತಿಥಿಯ ಪಂಗ್ತಿಗೆ ಭೋಜನಕ್ಕೆ ಕುಳಿತುಕೊಳ್ಳಲು ಸಿದ್ಧನಾಗಿ—"ಸ್ವಾಮಿನ್! ನಾವಿಬ್ಬರೂ ತಮ್ಮ ಪಂಗ್ತಿಗೆ ಭೋಜನಕ್ಕೆ ಬಂದೆವು" ಎಂದು ಹೇಳಿ ಅವನ ಪಂಗ್ತಿಗೆ ಹೋಗಿ ಕುಳಿತರು. ಆ ಮೇಲೆ ಅತಿಥಿಯು ಭೋಜನ ಮಾಡಲಿಕ್ಕೆ ಆರಂಭ ಮಾಡುವ ಮುಂಚೆ ಪುನಃ—"ಎಲೈ ರಾಜನೇ! ನೀನು ನಿಪುತ್ರಿಕನಿರುತ್ತೀ. ನಿಪುತ್ರಿಕರ ಮನೆಯಲ್ಲಿ ಅನ್ನಗ್ರಹಣ ಮಾಡಬಾರದೆಂದು ಶಾಸ್ತ್ರವಚನವಿರುತ್ತದೆ. ಆದುದರಿಂದ ನಾನು ನಿನ್ನ ಮನೆಯಲ್ಲಿ

ಅನ್ನವನ್ನು ಗ್ರಹಣ ಮಾಡಲಾರೆನು” ಎಂದು ಹೇಳಿದನು. ಆಗ ಶ್ರೀಯಾಳ ರಾಜನೂ ಚಾಂಗುಣಿಯೂ ಆ ಅತಿಥಿಗೆ ಕೈಜೋಡಿಸಿ—“ಸ್ವಾಮಿ! ಈ ಪ್ರಕಾರ ತಾವು ದಯಮಾಡಿ ಮಾಡಬಾರದು. ಇದ್ದ ಒಬ್ಬ ಮಗನನ್ನು ತಮ್ಮ ಗೋಸ್ಕರ ವಧ ಮಾಡಿದೆವು. ಈಗ ನಾವು ಇನ್ನೊಬ್ಬ ಮಗನನ್ನು ಎಲ್ಲಿಂದ ತರಬೇಕು? ತಾವು ಇಚ್ಛಾಭೋಜನ ಮಾಡಿಕೊಂಡು ತೃಪ್ತರಾಗಿ ಹೋದರೆ ಸಾಕು. ನಾವು ನಮ್ಮ ಮಗನನ್ನು ವಧ ಮಾಡಿದ ದುಃಖವನ್ನು ಸಹ ಮರೆತು ಬಿಡುವೆವು. ಈಗ ತಾವು ನಮಗೆ ನಿಪುತ್ರಿಕರೆಂದು ದೋಷವಿಟ್ಟು ನಮ್ಮಲ್ಲಿ ಭೋಜನ ಮಾಡದೆ ಹೋದರೆ ಗಾಯಕ್ಕೆ ಒರಿಯನ್ನು ಕೊಟ್ಟಂತಾಗುವದು. ಹಾಗೆ ತಾವು ದಯಮಾಡಿ ಮಾಡಬಾರದು. ಭೋಜನ ಮಾಡಿಕೊಂಡೇ ಹೋಗಬೇಕು” ಎಂದು ಬಹುಪರಿಯಿಂದ ಬೇಡಿಕೊಂಡರು. ಶ್ರೀಯಾಳರಾಜನ ಮತ್ತು ಚಾಂಗುಣಿಯ ಶೋಕವನ್ನು ನೋಡಿ ಆ ಅತಿಥಿಯ ಮನಸ್ಸು ಕರಗಿ ಹೋಗಿ ಅವನು ಅವರಿಬ್ಬರಿಗೂ—“ನೀವು ಮಹಾ ಸತ್ವಶೀಲರಿರುತ್ತೀರಿ. ನಿಮಗೆ ನಾನು ಪ್ರಸನ್ನನಾಗಿರುತ್ತೇನೆ. ನಿಮ್ಮ ಅಪೇಕ್ಷೆಯು ಏನಿರುತ್ತದೆಂಬು ವದನ್ನು ನೀವು ಅನುಮಾನ ಮಾಡದೆ ಬೇಡಿಕೊಳ್ಳಿರಿ” ಎಂದು ಹೇಳಿದನು. ಆಗ ಅವರಿಬ್ಬರೂ—“ಸ್ವಾಮಿನ್, ನಮ್ಮ ಮೇಲೆ ಬಂದಿರುವ ನಿಪುತ್ರಿಕತನದ ದೋಷವು ಹೋಗಬೇಕು” ಎಂದು ಬೇಡಿಕೊಂಡರು. ಆಗ ಅತಿಥಿಯು ಚಾಂಗುಣಿಗೆ—“ಎಲೈ ಮಹಾ ಪತಿವ್ರತೆಯಾದ ಚಾಂಗುಣಿಯೇ! ನೀನು ನಿನ್ನ ಮಗನಾದ ಚಿಲ್ಲಾಳನಿಗೆ ನಮ್ಮ ಪಂಗ್ತಿಯಲ್ಲಿ ಕುಳಿತು ಭೋಜನ ಮಾಡ ಲಿಕ್ಕೆ ಇನ್ನೊಂದು ತಾಟು ಬಡಿಸು. ಮಗನನ್ನು ಬಿಟ್ಟು ಮಾತಾಪಿತೃಗಳು ಭೋಜನ ಮಾಡುವದು ಉಚಿತವಲ್ಲ” ಎಂದು ನುಡಿದನು. ಆಗ ಚಾಂಗು ಣಿಯು ಪ್ರತ್ಯಕ್ಷ ಕೈಲಾಸನಾಥನಾದ ಶಂಕರನೇ ಅತಿಥಿಯ ವೇಷದಿಂದ ತಮ್ಮಲ್ಲಿಗೆ ಬಂದಿರುತ್ತಾನೆಂದು ಮನಸ್ಸಿನಲ್ಲಿ ದೃಢವಾಗಿ ತಿಳಿದುಕೊಂಡು ಮತ್ತೊಂದು ತಾಟನ್ನು ಚಿಲ್ಲಾಳನಿಗಾಗಿ ಬಡಿಸಿ, ಅತಿಥಿಯ ಆಜ್ಞೆಯ ಪ್ರಕಾರ-

“ ಬಾಳಾ ಚಿಲ್ಲಾಳಾ! ಬಾ” ಎಂದು ದೊಡ್ಡ ಧ್ವನಿಯಿಂದ ಕೂಗಿದಳು. ಆಗ ಚಿಲ್ಲಾಳನು ಓಡಿ ಬಂದು ಆ ಅತಿಥಿಗೂ ತನ್ನ ಮಾತಾಪಿತೃಗಳಿಗೂ ನಮಸ್ಕರಿಸಿ——“ ಹೇ ಪ್ರಿಯ ಮಾತೇ! ನಾನು ನನ್ನ ಓರಿಗೆಯವರ ಸಂಗಡ ಆನಂದ ಪೂರಿತನಾಗಿ ಆಡುತ್ತ ನಿಂತಿದ್ದೆನು. ಏನು ಕಾರಣ ಕರೆದೆ? ಹೇಳು. ಈ ಬಾಲಕನು ನಿನ್ನ ಸೇವೆಯನ್ನು ಮಾಡಲಿಕ್ಕೆ ತತ್ಪರನಿರುತ್ತಾನೆ” ಎಂದು ಹೇಳಿದನು. ಆಗ ಚಾಂಗುಣಿಯು ಅವನನ್ನು ಮೇಲಕ್ಕೆ ಎತ್ತಿ, ಅಪ್ಪಿಕೊಂಡು ಮುದ್ದಾಡಿದಳು. ಹಾಗೂ ಉಭಯ ಪತಿಪತ್ನಿಯರು ಆನಂದದಿಂದ ಚಿಲ್ಲಾಳನಿಗೆ— “ ಬಾಳಾ! ನಿನ್ನ ಜನ್ಮವು ನಮ್ಮಲ್ಲಿ ಆದಕಾರಣ ನಾವಿಬ್ಬರೂ ಧನ್ಯರಾದೆವು” ಎಂದು ಅವನಿಗೆ ಮುದ್ದು ಕೊಟ್ಟರು. ಆಗ ಆ ಅತಿಥಿಯು ರಾಜಪುತ್ರನಾದ ಚಿಲ್ಲಾಳನನ್ನು ತನ್ನ ಹತ್ತರ ಕರೆದು ತನ್ನ ಅಂಕಪೀಠದಲ್ಲಿ ಕುಳ್ಳಿರಿಸಿಕೊಂಡು ಆಶೀರ್ವಾದ ಮಾಡಿ ಶ್ರೀಯಾಳನಿಗೂ ಚಾಂಗುಣಿಗೂ ಹೇಳಿದ್ದೇನಂದರೆ — “ ಹೇ ನೃಪಶ್ರೇಷ್ಠಾ ಶ್ರೀಯಾಳಾ! ಹೇ ಮಹಾಪತಿವ್ರತೇ ಚಾಂಗುಣೇ! ನಾನು ನಿಮ್ಮ ಸತ್ವಪರೀಕ್ಷೆಯನ್ನು ಮಾಡುವ ಸಲುವಾಗಿ ಈ ಅತಿಥಿರೂಪವನ್ನು ಧಾರಣಮಾಡಿಕೊಂಡು ಬಂದೆನು. ನೀವು ಉಭಯತರೂ ನನ್ನ ಪರಮಭಕ್ತರು. ನಾನು ಈ ಬ್ರಹ್ಮಾಂಡದ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣನು. ನಾನೇ ತ್ರಿಜಗದಾಧಿಪತಿಯು ನಾನೇ ಸೂರ್ಯಚಂದ್ರರಿಗೆ ಪ್ರಕಾಶ ಕೊಡುವವನು. ನನ್ನಿಂದಲೇ ನವಗ್ರಹಗಳೂ ನಿಖಿಲ ತಾರೆಗಳೂ ಉತ್ಪನ್ನವಾದವು. ದೇವೇಂದ್ರಾದಿಗಳಿಗೆ ಸ್ವರ್ಗ ಸುಖವು ನನ್ನಿಂದಲೇ ಪ್ರಾಪ್ತವಾಗಿರುವದು. ನಿಖಿಲ ಬ್ರಹ್ಮಾಂಡವು ಯಾರನ್ನು ಕೊಂಡಾಡುತ್ತದೋ, ಯಾರನ್ನು ವಂದಿಸುತ್ತದೋ ಆ ಮಹಾದೇವನಾದ ಶ್ರೀ ಶಂಕರನೇ ನಾನು. ಇನ್ನು ವಿಲಂಬವೇಕೆ? ನಾನು ನನ್ನ ನಿಜಸ್ವರೂಪವನ್ನು ಪ್ರಕಟ ಮಾಡುತ್ತೇನೆ. ಶುದ್ಧಾಂತಃಕರಣದಿಂದ ಅವಲೋಕನ ಮಾಡಿರಿ” ಎಂದು ಹೇಳಿ ತನ್ನ ನಿಜಸ್ವರೂಪವನ್ನು ಪ್ರಕಟ ಮಾಡಿದನು. ಆಗ ಶ್ರೀಯಾಳರಾಜನೂ ಚಾಂಗು

ಣಿಯೂ ಭಕ್ತಿಪೂರ್ವಕವಾಗಿ ಶ್ರೀ ಶಂಕರನ ಪೂಜೆಯನ್ನು ಯಥಾವಿಧಿಪೂರ್ವಕವಾಗಿ ಮಾಡಿದರು. ತರುವಾಯ ಶ್ರೀ ಶಂಕರನು ಅವರಿಗೆ—"ನಿಮ್ಮ ಭಕ್ತಿಭಾವಕ್ಕೆ ನಾನು ಬಹಳೇ ಆನಂದಭರಿತನಾಗಿರುತ್ತೇನೆ. ಬೇಕಾದ ವರವನ್ನು ಬೇಡಿಕೊಳ್ಳಿರಿ" ಎಂದು ಅಪ್ಪಣೆಯನ್ನು ಕೊಟ್ಟನು. ಆಗ ಅವರಿಬ್ಬರೂ ಕೈಮುಗಿದು —"ಹೇ ದೇವಾಧಿದೇವಾ! ನಮಗೆ ತಾವು ಮೋಕ್ಷವನ್ನು ಕೊಡಬೇಕೆಂಬುವ ಅಪೇಕ್ಷೆಯ ಹೊರತಾಗಿ ಇನ್ನೊಂದೇನೂ ಇಲ್ಲ" ಎಂದು ಬೇಡಿಕೊಂಡರು. ಅಷ್ಟರಲ್ಲಿ ಕೈಲಾಸದಿಂದ ಶ್ರೀ ಶಂಕರನ ವಿಮಾನವು ಕೆಳಗೆ ಇಳಿದು ಬಂದಿತು. ಆಗ ಶ್ರೀ ಶಂಕರನು ಶ್ರೀಯಾಳನಿಗೂ ಚಾಂಗುಣಿಗೂ ತನ್ನ ವಿಮಾನದಲ್ಲಿ ಕುಳ್ಳಿರಿಸಿಕೊಂಡನು. ಹಾಗೂ ಚಿಲ್ಲಾಳನಿಗೆ ಸ್ವಹಸ್ತದಿಂದ ಸಿಂಹಾಸನದ ಮೇಲೆ ಕುಳ್ಳಿರಿಸಿ ಅವನ ಮೇಲೆ ಛತ್ರವನ್ನು ಹಿಡಿದು ಯಾವತ್ತು ರಾಜ್ಯಕಾರಭಾರವನ್ನು ಅವನ ಮಂತ್ರಿವರ್ಯನ ಕಡೆಗೆ ಕೊಟ್ಟು ಚಿಲ್ಲಾಳನಿಗೆ ಆಶೀರ್ವಾದವನ್ನು ಮಾಡಿದನು. ಶ್ರೀಯಾಳ ಚಾಂಗುಣಿಯಾದರೂ ತಮ್ಮ ಪುತ್ರನಿಗೆ ಆಶೀರ್ವಾದವನ್ನು ಮಾಡಿ ಶ್ರೀ ಶಂಕರನ ಸಂಗಡ ವಿಮಾನದಲ್ಲಿ ಕುಳಿತು ಕೈಲಾಸಕ್ಕೆ ಹೊರಟು ಹೋದರು. **ಧನ್ಯ! ಧನ್ಯ! ಶ್ರೀಯಾಳ ಚಾಂಗುಣಿಯರೂ ಅವರ ಸುಕುಮಾರನಾದ ಚಿಲ್ಲಾಳನೂ ತಮ್ಮ ಅಮೋಘವಾದ ಈಶ್ವರ ಭಕ್ತಿಯಿಂದಲೂ ಸತ್ವಗುಣದಿಂದಲೂ ಭೂಲೋಕದಲ್ಲಿ ಸತ್ಕೀರ್ತಿಯನ್ನೂ ಪರಲೋಕದಲ್ಲಿ ಸದ್ಗತಿಯನ್ನೂ ಸಂಪಾದಿಸಿದ್ದಕ್ಕಾಗಿ ಅವರ ಧನ್ಯವಾದವನ್ನು ಎಷ್ಟು ಮಾಡಿದರೂ ಕಡಿಮೆಯೇ ಸರಿ!!**



# ಶ್ರೀ. ಹೊನ್ನಾಪುರಮಠ ಇವರು ರಚಿಸಿದ
# ನೈತಿಕ-ಧಾರ್ಮಿಕ-ಮನೋರಂಜಕ
# ಪುಸ್ತಕಗಳು.



| | | |
|---|---|---|
| ೧ | ಶ್ರೀ ರಾಮದಾಸಸ್ವಾಮಿಗಳ ಚರಿತ್ರ. | ಬೆಲೆ ೧ ರುಪಾಯಿ |
| ೨ | ನೀತಿಮಂಜರಿ. ... ... ... | ೧೨ ಆಣೆ |
| ೩ | ಬಾಲಭಾರತ. (ಸಚಿತ್ರ) ... .. | ೧೦ ಆಣೆ |
| ೪ | ಬಾಲರಾಮಾಯಣ. (ಸಚಿತ್ರ) ... ... | ೮ ಆಣೆ |
| ೫ | ಬಾಲಭಾಗವತ. (ಸಚಿತ್ರ) ... ... | ೮ ಆಣೆ |
| ೬ | ಅದ್ಭುತಪ್ರೇಮ ಕಾದಂಬರಿ (ಐತಿಹಾಸಿಕ ಕಾದಂಬರಿ) ... | ೧೨ ಆಣೆ |
| ೭ | ತ್ರಾಟಿಕಾನಾಟಕ ('ಮೊಂಡ ಗಂಡ ತುಂಟ ಹೆಂಡತಿ' ನಾಟಕ) | ೧ ರು. |
| ೮ | ನಿಂದಾಪ್ರಭಾವನಾಟಕ ('ಮುದುಕಗಂಡ ಚಿಕ್ಕಹೆಂಡತಿ'ನಾಟಕ) | ೧೨ ಆಣೆ |
| ೯ | ಶ್ರೀ ರಾಮಕೃಷ್ಣ ಪರಮಹಂಸರ ಸತ್ಕಥೆಗಳು. ... | ೧೦ ಆಣೆ |
| ೧೦. | ಸಾವಿತ್ರೀಚರಿತ್ರ. (ಸಚಿತ್ರ) ... ... | ೫ ಆಣೆ |
| ೧೧ | ಪ್ರಹ್ಲಾದ ಚರಿತ್ರ. (ಸಚಿತ್ರ) ... | ೬ ಆಣೆ |
| ೧೨ | ಸುದಾಮಚರಿತ್ರ. (ಸಚಿತ್ರ) ... | ೪ ಆಣೆ |
| ೧೩ | ಧ್ರುವಚರಿತ್ರ. (ಸಚಿತ್ರ) ... ... | ೨ ಆಣೆ |
| ೧೪ | ಚಿಲ್ಲಾಳಚರಿತ್ರ. (ಸಚಿತ್ರ) ... ... | ೨ ಆಣೆ |
| ೧೫ | ಶ್ರೀ ಶಿವಲೀಲಾಮೃತ ಕಥೆಗಳು. ... ... | ೧೦ ಆಣೆ |
| ೧೬ | ವೀರಶೈವ ಶಿವಪೂಜಾವಿಧಿ ಮತ್ತು ಲಿಂಗಧಾರಣ ವಿಧಾನ... | ೪ ಆಣೆ |
| ೧೭ | ಶ್ರೀಕೃಷ್ಣ ಚರಿತ್ರ. (ಸಚಿತ್ರ) (ಮುದ್ರಣದಲ್ಲಿ) | ೧ ರುಪಾಯಿ |

**ಮ್ಯಾನೇಜರ ಚಂದ್ರೋದಯ ಪ್ರೆಸ್,**

**ಧಾರವಾಡ.**